**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 677 |
| ಸದಸ್ಯರ ಹೆಸರು | : | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 25-09-2020. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಜನಸಂಖ್ಯಾ ಹೆಚ್ಚಳದಿಂದಾಗಿ ಗ್ರಾಮೀಣ ಭಾಗದ ಘೋಷಿತ ಗ್ರಾಮಠಾಣಾ ಪ್ರದೇಶ ವ್ಯಾಪ್ತಿ ಮೀರಿ ಕಟ್ಟಡಗಳು ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಗ್ರಾಮಠಾಣಾ ವ್ಯಾಪ್ತಿಯ ಹೊರಗೆ ನಿರ್ಮಾಣ ಮಾಡಿಕೊಂಡಿರುವ ಕೃಷಿ ಭೂಮಿಯ ಅಘೋಷಿತ ಪಾರಂಪರಿಕ ವಿಸ್ತೃತ ಗ್ರಾಮಠಾಣಾ ಕಟ್ಟಡಗಳಿಗೆ ಯಾವುದೇ ಸಾರ್ವಜನಿಕ ಸೌಲಭ್ಯಗಳು ಸಿಗದೆ, ಗ್ರಾಮೀಣ ಜನತೆ ವಂಚಿತರಾಗುತ್ತಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆಯೇ; | ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮಠಾಣಾ ಗಡಿ ತುಂಬಾ ಹಿಂದೆ ನಿಗಧಿಪಡಿಸಿದ್ದು, ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸುವ ಬಗ್ಗೆ ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ದಿನಾಂಕ:28-10-2016 ರಂದು ಹೊರಡಿಸಿರುವ ಜಂಟಿ ಸುತ್ತೋಲೆ ಮೂಲಕ ಕೆಲವು ಮಾರ್ಗಸೂಚಿಗಳನ್ನು ನೀಡಿದೆ. ಅದರಂತೆ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸಲು ಕ್ರಮ ವಹಿಸಲಾಗಿದೆ. |
| (ಇ) | ಈಗಾಗಲೇ ನಿರ್ಮಾಣ ಮಾಡಿಕೊಂಡಿರುವ ಪಾರಂಪರಿಕ ಕೃಷಿ ಭೂಮಿಯಲ್ಲಿನ ಕಟ್ಟಡಗಳಿಗೆ ವಿಸ್ತೃತ ಗ್ರಾಮಠಾಣಾ ಪ್ರದೇಶ ಎಂದು ಘೋಷಿಸುವ ಉದ್ದೇಶಕ್ಕಾಗಿ ಒಂದು ಭಾರಿ ವಿನಾಯಿತಿ ನೀಡಿ ಸಕ್ರಮಗೊಳಿಸುವ ವಿಧೇಯಕ ಮಂಡಿಸಲು ಸರ್ಕಾರಕ್ಕೆ ನಿರ್ಬಂಧಗಳಿವೆಯೇ; (ವಿವರ ನೀಡುವುದು) | ಕಂದಾಯ ಇಲಾಖೆಯಲ್ಲಿ ಇಂತಹ ಪ್ರಸ್ತಾವನೆಗಳು ಪರಿಶೀಲನೆಯಲ್ಲಿರುವುದಿಲ್ಲ. |
| (ಈ) | ಸಾರ್ವತ್ರಿಕ, ಸಾಮಾಜಿಕ ನ್ಯಾಯ ದೃಷ್ಟಿಯಿಂದ ಕೃಷಿ ಭೂಮಿಯಲ್ಲಿ ನಿರ್ಮಾಣಗೊಂಡಿರುವ ಮನೆಗಳವರೆಗೂ ನಿಗಧಿತ ಮಿತಿಯೊಳಗೆ ಕೃಷಿ ಭೂಮಿಯಲ್ಲಿನ ಅಘೋಷಿತ ಪಾರಂಪರಿಕ ವಿಸ್ತೃತ ಗ್ರಾಮಠಾಣಾ ಕಟ್ಟಡಗಳಿಗೆ ವಿಸ್ತೃತ ಗ್ರಾಮಠಾಣಾ ಪ್ರದೇಶ ಎಂದು ಶಾಸನ ರಚಿಸಿ ಗ್ರಾಮೀಣ ಜನತೆಗೆ ಅವಕಾಶ ಮಾಡಿಕೊಡಲು ಸರ್ಕಾರ ಬದ್ಧವಾಗಿದೆಯೇ? | |

ಸಂ. ಗ್ರಾಅಪ 724 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು